

# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 642 |
| ಸದಸ್ಯರ ಹೆಸರು | : | ಶ್ರೀ ನಿರಾಣಿ ಹಣಮಂತ್ ರುದ್ರಪ್ಪ |
| ಉತ್ತರಿಸುವ ದಿನಾಂಕ | : | 17/12/2021 |
| ಉತ್ತರಿಸುವ ಸಚಿವರು | : | ಸಮಾಜ ಕಲ್ಯಾಣ ಮತ್ತು ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು |

<table>
<tr><th>ಕ್ರ.ಸಂ</th><th>ವಿಷಯ</th><th>ಮಾಹಿತಿ</th></tr>
<tr><td>ಅ)</td><td>ಸಮಾಜ ಕಲ್ಯಾಣ ಇಲಾಖೆಯಿಂದ ನಡೆಸಲಾಗುತ್ತಿರುವ ಮೆಟ್ರಿಕ್ ಪೂರ್ವ ಹಾಗೂ ಮೆಟ್ರಿಕ್ ನಂತರದ ಹಾಸ್ಟೆಲ್‌ಗಳು ಎಷ್ಟು: (ಜಿಲ್ಲಾವಾರು ಮಾಹಿತಿ ನೀಡುವುದು)</td><td>ಸಮಾಜ ಕಲ್ಯಾಣ ಇಲಾಖೆಯ ವತಿಯಿಂದ ಪರಿಶಿಷ್ಟ ಜಾತಿಯ 1231 ಮೆಟ್ರಿಕ್ ಪೂರ್ವ ಹಾಗೂ 636 ಮೆಟ್ರಿಕ್ ನಂತರದ ವಿದ್ಯಾರ್ಥಿ ನಿಲಯಗಳನ್ನು ನಡೆಸಲಾಗುತ್ತಿದ್ದು, ವಿವರ ಈ ಕೆಳಕಂಡಂತಿದೆ.
<table>
<tr><th>ವಿದ್ಯಾರ್ಥಿ ನಿಲಯಗಳ ವಿವರ</th><th>ಒಟ್ಟು ವಿ.ನಿ.ಗಳ ಸಂಖ್ಯೆ</th><th>ಸ್ವಂತ ಕಟ್ಟಡ</th><th>ಬಾಡಿಗೆ ರಹಿತ/ ಬಾಡಿಗೆ</th></tr>
<tr><td>ಮೆಟ್ರಿಕ್ ಪೂರ್ವ</td><td>1231</td><td>1156</td><td>75</td></tr>
<tr><td>ಮೆಟ್ರಿಕ್ ನಂತರ</td><td>636</td><td>418</td><td>218</td></tr>
<tr><td>ಒಟ್ಟು</td><td>1867</td><td>1574</td><td>293</td></tr>
</table>
ಜಿಲ್ಲಾವಾರು ವಿವರಗಳ ಮಾಹಿತಿಯನ್ನು ಅನುಬಂಧ-1 ರಲ್ಲಿ ನೀಡಿದೆ.</td></tr>
<tr><td>ಆ)</td><td>ಹಾಸ್ಟಲ್‌ಗಳಿಗೆ ಸ್ವಂತ ಕಟ್ಟಡಗಳಿವೆಯೇ: ಹಾಗಿದ್ದಲ್ಲಿ ಸ್ವಂತ ಕಟ್ಟಡವಿರುವ ಹಾಸ್ಟೆಲ್‌ಗಳ ಸಂಖ್ಯೆ ಎಷ್ಟು: (ಬೆಳಗಾವಿ, ಬಾಗಲಕೋಟೆ, ವಿಜಯಪುರ ಜಿಲ್ಲೆಗಳ ವಿವರ ನೀಡುವುದು).</td><td>ಬೆಳಗಾವಿ, ವಿಜಯಪುರ ಮತ್ತು ಬಾಗಲಕೋಟೆ ಜಿಲ್ಲೆಗಳಿಗೆ ಸಂಬಂಧಿಸಿದಂತೆ ಸ್ವಂತ ಕಟ್ಟಡ ಹಾಗೂ ಬಾಡಿಗೆ ಕಟ್ಟಡಗಳ ವಿವರ ಈ ಕೆಳಕಂಡಂತಿದೆ.
<table>
<tr><th>ಜಿಲ್ಲೆ</th><th>ವಿದ್ಯಾರ್ಥಿ ನಿಲಯಗಳ ಸಂಖ್ಯೆ</th><th>ಸ್ವಂತ ಕಟ್ಟಡ</th><th>ಬಾಡಿಗೆ ರಹಿತ/ ಬಾಡಿಗೆ</th></tr>
<tr><td>ಬೆಳಗಾವಿ</td><td>94</td><td>87</td><td>07</td></tr>
<tr><td>ವಿಜಯಪುರ</td><td>73</td><td>62</td><td>11</td></tr>
<tr><td>ಬಾಗಲಕೋಟೆ</td><td>64</td><td>48</td><td>16</td></tr>
</table></td></tr>
<tr><td>ಇ)</td><td>ಬೆಳಗಾವಿ, ಬಾಗಲಕೋಟೆ, ವಿಜಯಪುರ, ಜಿಲ್ಲೆಗಳಲ್ಲಿ ಬಾಡಿಗೆ ಕಟ್ಟಡದಲ್ಲಿ ಹಾಸ್ಟೆಲ್‌ಗಳನ್ನು ನಡೆಸಲಾಗುತ್ತಿದೆಯೇ: ಹಾಗಿದ್ದಲ್ಲಿ ಬಾಡಿಗೆ ಕಟ್ಟಡದಲ್ಲಿರುವ ಹಾಸ್ಟೆಲ್‌ಗಳಿಗೆ ಮಂಜೂರಾಗಿರುವ ವರ್ಷ, ಮಕ್ಕಳ ಸಂಖ್ಯೆ, ಯಾವ ಸ್ಥಳದಲ್ಲಿ ಹಾಸ್ಟೆಲ್ ನಡೆಸಲಾಗುತ್ತಿದೆ; ಬಾಡಿಗೆ ಮೊತ್ತ ಎಷ್ಟು ನೀಡಲಾಗುತ್ತಿದೆ: ಬಾಡಿಗೆ ಕಟ್ಟಡದ ವಿಸ್ತೀರ್ಣ ಕುರಿತು ಮಾಹಿತಿ ನೀಡುವುದು.</td><td>ಬಾಡಿಗೆ ಕಟ್ಟಡಗಳಲ್ಲಿರುವ ವಿದ್ಯಾರ್ಥಿ ನಿಲಯಗಳ ಮಂಜೂರಾತಿ ವರ್ಷ, ಮಂಜೂರಾತಿ ಸಂಖ್ಯೆ, ಕಟ್ಟಡದ ವಿಸ್ತೀರ್ಣ ಹಾಗೂ ಪಾವತಿ ಮಾಡುತ್ತಿರುವ ಬಾಡಿಗೆ ಮೊತ್ತದ ವಿವರಗಳನ್ನು ಅನುಬಂಧ-2 ರಲ್ಲಿ ನೀಡಿದೆ.</td></tr>
</table>

| | | |
|---|---|---|
| ಈ) | ಸ್ವಂತ ಕಟ್ಟಡ ನಿರ್ಮಾಣ ಮಾಡಲು ಸರ್ಕಾರಕ್ಕೆ ಇರುವ ತೊಂದರೆಯೇನು: ಸರ್ಕಾರಿ ಭೂಮಿ ಲಭ್ಯವಿಲ್ಲದಿದ್ದಲ್ಲಿ ನಗರಾಭಿವೃದ್ಧಿ ಇಲಾಖೆಯಲ್ಲಿ ಲಭ್ಯವಿರುವ ನಾಗರೀಕ ಸೌಲಭ್ಯ ನಿವೇಶನ ಉಚಿತವಾಗಿ ನೀಡುವ ಉದ್ದೇಶ ಸರ್ಕಾರಕ್ಕೆ ಇದೆಯೇ: ನಾಗರೀಕ ಸೌಲಭ್ಯ ನಿವೇಶನ ಉಚಿತವಾಗಿ ನೀಡುವುದರಿಂದ ಸರ್ಕಾರಕ್ಕೆ ಆಗುವ ನಷ್ಟವೇನು; ನಿವೇಶನಗಳ ತೊಂದರೆಯಿಂದ ಸರ್ಕಾರ ಸಾಕಷ್ಟು ಅನುದಾನವನ್ನು ಬಾಡಿಗೆಗೆ ನೀಡುತ್ತಿರುವುದರಿಂದ ಆರ್ಥಿಕ ಹೊರೆಯಾಗುವುದಿಲ್ಲವೇ; ಸರ್ಕಾರ ಯಾವ ಕಾಲಮಿತಿಯೊಳಗೆ ಸ್ವಂತ ಕಟ್ಟಡ ನಿರ್ಮಾಣ ಮಾಡುವುದು: ಈ ಬಗ್ಗೆ ಸರ್ಕಾರ ಕೈಗೊಂಡ ಕ್ರಮವೇನು; | ಸಮಾಜ ಕಲ್ಯಾಣ ಇಲಾಖೆಯ ವತಿಯಿಂದ ಪರಿಶಿಷ್ಟ ಜಾತಿಯ ವಿದ್ಯಾರ್ಥಿಗಳ ಶೈಕ್ಷಣಿಕ ಅಭಿವೃದ್ಧಿಗಾಗಿ 1867 ಸರ್ಕಾರಿ ವಿದ್ಯಾರ್ಥಿ ನಿಲಯಗಳನ್ನು ನಡೆಸಲಾಗುತ್ತಿರುತ್ತದೆ. ಈ ಪೈಕಿ 1574 ವಿದ್ಯಾರ್ಥಿ ನಿಲಯಗಳು ಸ್ವಂತ ಕಟ್ಟಡಗಳನ್ನು ಹೊಂದಿದ್ದು, 293 ವಿದ್ಯಾರ್ಥಿ ನಿಲಯಗಳು ಬಾಡಿಗೆ ರಹಿತ/ ಬಾಡಿಗೆ ಕಟ್ಟಡಗಳಲ್ಲಿರುತ್ತವೆ. ಸದರಿ 293 ವಿದ್ಯಾರ್ಥಿ ನಿಲಯಗಳ ಪೈಕಿ 155 ವಿದ್ಯಾರ್ಥಿ ನಿಲಯಗಳಿಗೆ ಈಗಾಗಲೇ ಸ್ವಂತ ಕಟ್ಟಡ ನಿರ್ಮಾಣ ಕಾಮಗಾರಿಗಳನ್ನು ಕೈಗೊಳ್ಳಲಾಗುತ್ತಿದ್ದು, ವಿವಿಧ ಹಂತಗಳಲ್ಲಿ ಪ್ರಗತಿಯಲ್ಲಿರುತ್ತವೆ. 94 ವಿದ್ಯಾರ್ಥಿ ನಿಲಯಗಳಿಗೆ ಸೂಕ್ತ ನಿವೇಶನಗಳನ್ನು ಪಡೆಯಲಾಗಿದ್ದು, ಸ್ವಂತ ಕಟ್ಟಡ ನಿರ್ಮಾಣಕ್ಕಾಗಿ ಪ್ರಸಕ್ತ ಸಾಲಿನಲ್ಲಿ ಒದಗಿಸಿಕೊಳ್ಳಲಾಗಿರುವ ರೂ.175.00 ಕೋಟಿಗಳ ಅನುದಾನದಲ್ಲಿ ಸದರಿ ವಿದ್ಯಾರ್ಥಿ ನಿಲಯಗಳಿಗೆ ಸ್ವಂತ ಕಟ್ಟಡ ನಿರ್ಮಾಣ ಮಾಡಲು ಕ್ರಮವಹಿಸಲಾಗುತ್ತಿದೆ. ಬಾಕಿ 44 ವಿದ್ಯಾರ್ಥಿ ನಿಲಯಗಳಿಗೆ ಸಂಬಂಧಿಸಿದಂತೆ ಸೂಕ್ತ ನಿವೇಶನಗಳನ್ನು ಗುರುತಿಸಲಾಗಿದ್ದು, ಇಲಾಖೆಯ ವಶಕ್ಕೆ ಹಸ್ತಾಂತರ ಪಡೆದ ನಂತರ ಸ್ವಂತ ಕಟ್ಟಡ ನಿರ್ಮಾಣ ಮಾಡಲು ಕ್ರಮವಹಿಸಲಾಗುವುದು.<br><br>ನಗರಾಭಿವೃದ್ಧಿ ಇಲಾಖೆಯಲ್ಲಿ ಲಭ್ಯವಿರುವ ನಾಗರೀಕ ಸೌಲಭ್ಯ ನಿವೇಶನಗಳನ್ನು ರಿಯಾಯಿತಿ ದರದಲ್ಲಿ ನೀಡಲಾಗುತ್ತಿದ್ದು, ಉಚಿತವಾಗಿ ನೀಡುವ ಸಂಬಂಧವಾಗಿ ನಗರಾಭಿವೃದ್ಧಿ ಇಲಾಖೆಯೊಂದಿಗೆ ಸಮಾಲೋಚಿಸಲಾಗುವುದು. |
| ಉ) | ಖಾಯಂ ಸಹ ಶಿಕ್ಷಕರು ಉಪನ್ಯಾಸಕರು ಹಾಗೂ ಪ್ರಾಂಶುಪಾಲರ ಹುದ್ದೆಗಳಿಗೆ ಯಾವ ಕಾಲಮಿತಿಯಲ್ಲಿ ಬಡ್ತಿ ನೀಡಲಾಗುವುದು; | ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದ ವಸತಿ ಶಾಲಾ ಕಾಲೇಜುಗಳ ಬೋಧಕ/ಬೋಧಕೇತರ ಸಿಬ್ಬಂದಿಗಳಿಗೆ ಸಂಬಂಧಿಸಿದಂತೆ ಕರಡು ವೃಂದ ಮತ್ತು ನೇಮಕಾತಿ ನಿಯಮವಾಳಿಯನ್ನು ಪ್ರಕಟಿಸಲಾಗಿದ್ದು, ಈ ಸಂಬಂಧ ಸ್ವೀಕೃತವಾಗಿರುವ ಆಕ್ಷೇಪಣೆಗಳನ್ನು ಪರಿಶೀಲಿಸಲಾಗುತ್ತಿದ್ದು, ಅಂತಿಮ ವೃಂದ ಮತ್ತು ನೇಮಕಾತಿ ನಿಯಮಾವಳಿಯನ್ನು ಪ್ರಕಟಿಸಿದ ನಂತರ ಮುಂಬಡ್ತಿ ನೀಡುವ ಬಗ್ಗೆ ನಿಯಮಾನುಸಾರ ಕ್ರಮವಹಿಸಲಾಗುವುದು. |
| ಊ) | ಸದರಿ ಸಹ ಶಿಕ್ಷಕರಿಗೆ ಕೆ.ಜಿ.ಐ.ಡಿ, ಡಿ.ಸಿ.ಆರ್.ಜಿ ಹೆಚ್ಚುವರಿ ವೇತನ ಬಡ್ತಿ ಹಾಗೂ ಇತರೆ ಸೌಲಭ್ಯಗಳನ್ನು ಕಲ್ಪಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು; (ವಿವರ ನೀಡುವುದು) | ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದ ವಸತಿ ಶಾಲೆ/ಕಾಲೇಜುಗಳ ಬೋಧಕ/ ಬೋಧಕೇತರ ಸಿಬ್ಬಂದಿಗಳಿಗೆ ಸರ್ಕಾರದಿಂದ ಕಾಲಕಾಲಕ್ಕೆ ನಿಗದಿಪಡಿಸುವ ವೇತನ ಶ್ರೇಣಿ, ತುಟ್ಟಿ ಭತ್ಯೆ, ಮನೆ ಬಾಡಿಗೆ ಭತ್ಯೆ, ವೈದ್ಯಕೀಯ ಭತ್ಯೆ (Medical Allowance) ಗಳಿಕೆ ರಜೆ ನಗದೀಕರಣ, ವೇತನ ಬಡ್ತಿ ಇತ್ಯಾದಿ ಸೌಲಭ್ಯಗಳನ್ನು ಒದಗಿಸಲಾಗುತ್ತಿದೆ. ವಿವರಗಳನ್ನು ಅನುಬಂಧ–3 ರಲ್ಲಿ ನೀಡಿದೆ. |

ಸಕಇ 482 ಪಕವಿ 2021

(ಕೋಟ ಶ್ರೀನಿವಾಸ ಪೂಜಾರಿ)
ಸಮಾಜ ಕಲ್ಯಾಣ ಮತ್ತು
ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು.

ಮಾನ್ಯ ವಿಧಾನ ಪರಿಷತ್ ಸದಸ್ಯರಾದ ಶ್ರೀ ನಿರಾಣಿ ಹಣಮಂತ್ ರುದ್ರಪ್ಪ ರವರ ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ-534 (642) ಕ್ಕೆ ಅನುಬಂಧ-1

ಸಮಾಜ ಕಲ್ಯಾಣ ಇಲಾಖೆಯ ವತಿಯಿಂದ ನಡೆಸಲಾಗುತ್ತಿರುವ ಸರ್ಕಾರಿ ವಿದ್ಯಾರ್ಥಿ ನಿಲಯಗಳ ಕಟ್ಟಡಗಳ ವಿವರ

| ಕ್ರ. ಸಂ | ಜಿಲ್ಲೆ | ಮೆಟ್ರಿಕ್ ಪೂರ್ವ ವಿದ್ಯಾರ್ಥಿ ನಿಲಯ | ಮೆಟ್ರಿಕ್ ನಂತರದ ವಿದ್ಯಾರ್ಥಿ ನಿಲಯ |
|---|---|---|---|
| 1 | ಬೆಂಗಳೂರು ನಗರ | 28 | 27 |
| 2 | ಬೆಂಗಳೂರು ಗ್ರಾಮಾಂತರ | 23 | 9 |
| 3 | ಚಿತ್ರದುರ್ಗ | 52 | 37 |
| 4 | ದಾವಣಗೆರೆ | 38 | 26 |
| 5 | ಕೋಲಾರ | 52 | 19 |
| 6 | ತುಮಕೂರು | 63 | 36 |
| 7 | ರಾಮನಗರ | 37 | 13 |
| 8 | ಚಿಕ್ಕಬಳ್ಳಾಪುರ | 49 | 23 |
| 9 | ಶಿವಮೊಗ್ಗ | 49 | 26 |
| 10 | ಮೈಸೂರು | 47 | 34 |
| 11 | ಚಾಮರಾಜನಗರ | 40 | 16 |
| 12 | ಮಂಡ್ಯ | 46 | 21 |
| 13 | ಹಾಸನ | 58 | 30 |
| 14 | ಚಿಕ್ಕಮಗಳೂರು | 38 | 20 |
| 15 | ಕೊಡಗು | 17 | 4 |
| 16 | ದಕ್ಷಿಣ ಕನ್ನಡ | 19 | 11 |
| 17 | ಉಡುಪಿ | 15 | 7 |
| 18 | ಬೆಳಗಾಂ | 66 | 28 |
| 19 | ಬಿಜಾಪುರ | 56 | 17 |
| 20 | ಬಾಗಲಕೋಟೆ | 43 | 21 |
| 21 | ಧಾರವಾಡ | 14 | 16 |
| 22 | ಗದಗ್ | 26 | 17 |
| 23 | ಹಾವೇರಿ | 37 | 21 |
| 24 | ಕಾರವಾರ | 26 | 7 |
| 25 | ಗುಲ್ಬರ್ಗಾ | 72 | 32 |
| 26 | ರಾಯಚೂರು | 46 | 28 |
| 27 | ಕೊಪ್ಪಳ | 33 | 16 |
| 28 | ಬಳ್ಳಾರಿ | 61 | 41 |
| 29 | ಬೀದರ್ | 42 | 19 |
| 30 | ಯಾದಗಿರಿ | 38 | 14 |
| | **ಒಟ್ಟು** | **1231** | **636** |

ಮಾನ್ಯ ವಿಧಾನ ಪರಿ ಷತ್ ಸದಸ್ಯರಾದ ಶ್ರೀ ನಿರಾಣಿ ಹಣಮಂತ್ ರುದ್ರಪ್ಪ ರವರ ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ–534 (642) ಕ್ಕೆ ಅನುಬಂಧ–2

ಬೆಳಗಾವಿ, ವಿಜಯಪುರ ಮತ್ತು ಬಾಗಲಕೋಟೆ ಜಿಲ್ಲೆಗಳಲ್ಲಿ ಬಾಡಿಗೆ ಕಟ್ಟಡಗಳಲ್ಲಿ ನಡೆಸುತ್ತಿರುವ ವಿದ್ಯಾರ್ಥಿ ನಿಲಯಗಳ ವಿವರ.

| ಕ್ರ. ಸಂ. | ತಾಲ್ಲೂಕು | ವಿದ್ಯಾರ್ಥಿ ನಿಲಯದ ವಿವರ | ಮಂಜೂರಾದ ವರ್ಷ | ಮಂಜೂರಾತಿ ಸಂಖ್ಯೆ | ಬಾಡಿಗೆ ಕಟ್ಟಡದ ವಿಸ್ತೀರ್ಣ | ಮಾಸಿಕ ಬಾಡಿಗೆ ಮೊತ್ತ (ರೂ.ಗಳಲ್ಲಿ) |
|---|---|---|---|---|---|---|
| | | | ಬೆಳಗಾವಿ | | | |
| 1 | ಬೆಳಗಾವಿ | ಸರಕಾರಿ ಮೆಟ್ರಿಕ ನಂತರದ ಬಾಲಕರ ವಿದ್ಯಾರ್ಥಿ ನಿಲಯ, ಬೆಳಗಾವಿ | 2020 | 100 | 45*50 ಚದರ ಅಡಿ | 83800/– |
| 2 | ಬೆಳಗಾವಿ | ಸರಕಾರಿ ಮೆಟ್ರಿಕ ನಂತರದ ಬಾಲಕಿಯರ ವಿದ್ಯಾರ್ಥಿ ನಿಲಯ, ಬೆಳಗಾವಿ | 2020 | 100 | 40*50 ಚದರ ಅಡಿ | 81900/– |
| 3 | ರಾಯಬಾಗ | ಸರಕಾರಿ ಮೆಟ್ರಿಕ ನಂತರದ ಬಾಲಕರ ವಿದ್ಯಾರ್ಥಿ ನಿಲಯ, ರಾಯಬಾಗ | 2013 | 100 | 2300 ಚದರ ಅಡಿ | 46727/– |
| 4 | ರಾಯಬಾಗ | ಸರಕಾರಿ ಮೆಟ್ರಿಕ ನಂತರದ ಬಾಲಕರ ವಿದ್ಯಾರ್ಥಿ ನಿಲಯ, ಹಾರೂಗೇರಿ | 2015 | 100 | 372 ಚದರ ಮೀಟರ್ | 34200/– |
| 5 | ರಾಯಬಾಗ | ಸರಕಾರಿ ಮೆಟ್ರಿಕ ನಂತರದ ಬಾಲಕಿಯರ ವಿದ್ಯಾರ್ಥಿ ನಿಲಯ, ರಾಯಬಾಗ | 2015 | 100 | 226.92 ಚದರ ಮೀಟರ್ | 32000/– |
| 6 | ಸವದತ್ತಿ | ಸರಕಾರಿ ಮೆಟ್ರಿಕ ನಂತರದ ಬಾಲಕರ ವಿದ್ಯಾರ್ಥಿ ನಿಲಯ, ಸವದತ್ತಿ | 2015–16 | 100 | 9345.62 ಚದರ ಅಡಿ | 45000/– |
| 7 | ಹುಕ್ಕೇರಿ | ಸರಕಾರಿ ಮೆಟ್ರಿಕ ನಂತರದ ಬಾಲಕರ ವಿಯಾರ್ಥಿ ನಿಲಯ ಹುಕ್ಕೇರಿ | 2008–09 | 50 | 2500 ಚದರ ಅಡಿ | 39800/– |

| ವಿಜಯಪುರ | | | | | | |
|---|---|---|---|---|---|---|
| 1 | ವಿಜಯಪುರ | ಸರಕಾರಿ ಮೆಟ್ರಿಕ್ ನಂತರದ ಬಾಲಕರ ವಸತಿ ನಿಲಯ, ವಿಜಯಪುರ ಟೌನ್ | 2010–11 | 100 | 5040 ಚ.ಅ | 79302/– |
| 2 | ಇಂಡಿ | ಸರಕಾರಿ ಮೆಟ್ರಿಕ್ ಪೂರ್ವ ಬಾಲಕರ ವಸತಿ ನಿಲಯ, ಇಂಡಿ. | 1983–84 | 90 | 7259 ಚ.ಅ | 86640/– |
| 3 | ಇಂಡಿ | ಸರಕಾರಿ ಮೆಟ್ರಿಕ್ ಪೂರ್ವ ಬಾಲಕರ ವಸತಿ ನಿಲಯ, ಧೂಳಖೇಡ | 1995–96 | 65 | 1820 ಚ.ಅ | 11420/– |
| 4 | ಇಂಡಿ | ಸರಕಾರಿ ಮೆಟ್ರಿಕ್ ನಂತರದ ಬಾಲಕರ ವಸತಿ ನಿಲಯ, ಇಂಡಿ ಟೌನ್ | 2015–16 | 100 | 2328 ಚ.ಅ | 118000/– |
| 5 | ಸಿಂದಗಿ | ಸರಕಾರಿ ಮೆಟ್ರಿಕ್ ಪೂರ್ವ ಬಾಲಕಿಯರ ವಸತಿ ನಿಲಯ, ಸಿಂದಗಿ ಟೌನ್ | 2008–09 | 65 | 571.09 ಚ.ಅ | 35120/– |
| 6 | ಸಿಂದಗಿ | ಸರಕಾರಿ ಮೆಟ್ರಿಕ್ ನಂತರದ ಬಾಲಕರ ವಸತಿ ನಿಲಯ, ಸಿಂದಗಿ ಟೌನ್ | 2018–19 | 100 | 2929 ಚ.ಅ | 33222/– |
| 7 | ಬಸವನಬಾಗೇವಾಡಿ | ಮೆಟ್ರಿಕ್ ನಂತರ ಬಾಲಕೀಯರ ವಸತಿ ನಿಲಯ ಬಸವನಬಾಗೇವಾಡಿ | 2008–09 | 100 | 101.89 ಚ.ಮೀ | 31026/– |
| 8 | ಮುದ್ದೇಬಿಹಾಳ | ಸರಕಾರಿ ಮೆಟ್ರಿಕ್ ಪೂರ್ವ ಬಾಲಕರ ವಸತಿ ನಿಲಯ, ಕೊಳೂರು | 2005–06 | 65 | 850 ಚ.ಅ | 4519/– |
| 9 | ಮುದ್ದೇಬಿಹಾಳ | ಸರಕಾರಿ ಮೆಟ್ರಿಕ್ ನಂತರದ ಬಾಲಕರ ವಸತಿ ನಿಲಯ, ಮುದ್ದೇಬಿಹಾಳ | 2008–09 | 100 | 4000 ಚ.ಅ | 43790/– |
| 10 | ಮುದ್ದೇಬಿಹಾಳ | ಸರಕಾರಿ ಮೆಟ್ರಿಕ್ ನಂತರದ ಬಾಲಕರ ವಸತಿ ನಿಲಯ, ತಾಳಿಕೋಟಿ | 2012–13 | 100 | 4000 ಚ.ಅ | 38190/– |
| 11 | ಮುದ್ದೇಬಿಹಾಳ | ಸರಕಾರಿ ಮೆಟ್ರಿಕ್ ನಂತರದ ಬಾಲಕಿಯರ ವಸತಿ ನಿಲಯ, ಮುದ್ದೇಬಿಹಾಳ | 2012–13 | 100 | 3500 ಚ.ಅ | 65350/– |

| | | | | | | |
|---|---|---|---|---|---|---|
| ಬಾಗಲಕೋಟೆ | | | | | | |
| 1 | ಜಮಖಂಡಿ | ಸರ್ಕಾರಿ ಮೆಟ್ರಿಕ್ ಪೂರ್ವ ಬಾಲಕರ ವಸತಿ ನಿಲಯ, ತೇರದಾಳ | 2004 | 65 | 156.98 ಚ.ಮೀ | 19835/- |
| 2 | ಜಮಖಂಡಿ | ಸರ್ಕಾರಿ ಮೆಟ್ರಿಕ್ ನಂತರ ಬಾಲಕರ ವಸತಿ ನಿಲಯ, ಜಮಖಂಡಿ | 2015 | 100 | 595.35 ಚ.ಮೀ | 78941/- |
| | | | | | 495.84 ಚ.ಮೀ | 84000/- |
| 3 | ಜಮಖಂಡಿ | ಸರ್ಕಾರಿ ಮೆಟ್ರಿಕ್ ನಂತರ ಬಾಲಕಿಯರ ವಸತಿ ನಿಲಯ ರಬಕವಿ- ಬನಹಟ್ಟಿ | 2020 | 100 | 402.94 ಚ.ಮೀ | 94000/- |
| 4 | ಬಾದಾಮಿ | ಸರ್ಕಾರಿ ಮೆಟ್ರಿಕ್ ನಂತರ ಬಾಲಕಿಯರ ವಸತಿ ನಿಲಯ ಬಾದಾಮಿ | 2015 | 100 | 174.53 ಚ.ಮೀ | 47000/- |
| | | | | | 180.00 ಚ.ಮೀ | 31000/- |
| 5 | ಬಾದಾಮಿ | ಸರ್ಕಾರಿ ಮೆಟ್ರಿಕ್ ನಂತರ ಬಾಲಕರ ವಸತಿ ನಿಲಯ, ಬಾದಾಮಿ | 2013 | 100 | 50.50 ಚ.ಮೀ | 38100/- |
| | | | | | 282.44 ಚ.ಮೀ | 89500/- |
| 6 | ಬಾಗಲಕೋಟೆ | ಸರ್ಕಾರಿ ಮೆಟ್ರಿಕ್ ನಂತರ ಬಾಲಕರ ವಸತಿ ನಿಲಯ, ಬಾಗಲಕೋಟೆ (ಹೊಸದು-2) | 2017 | 100 | 495.36 ಚ.ಮೀ | 48600/- |
| 7 | ಬಾಗಲಕೋಟೆ | ಸರ್ಕಾರಿ ಮೆಟ್ರಿಕ್ ನಂತರ ಬಾಲಕರ ವಸತಿ ನಿಲಯ ಬಾಗಲಕೋಟೆ (ಹೊಸದು-3) | 2021 | 250 | 690.48 ಚ.ಮೀ | 98900/- |

| | | | | | | |
|---|---|---|---|---|---|---|
| 8 | ಮುಧೋಳ | ಸರ್ಕಾರಿ ಮೆಟ್ರಿಕ್ ಪೂರ್ವ ಬಾಲಕರ ವಸತಿ ನಿಲಯ, ವಜ್ರಮಟ್ಟಿ | 2020 | 50 | 752.51 ಚ.ಮೀ | ಪ್ರಸ್ತುತ ಸಾಲಿನಲ್ಲಿ ವಸತಿ ನಿಲಯಗಳು ಪ್ರಾರಂಭವಾಗಿರುವುದರಿಂದ ಬಾಡಿಗೆ ನಿಗದಿ ಪಡಿಸಿರುವುದಿಲ್ಲ |
| 9 | ಮುಧೋಳ | ಸರ್ಕಾರಿ ಮೆಟ್ರಿಕ್ ನಂತರ ಬಾಲಕರ ವಸತಿ ನಿಲಯ, ಮುಧೋಳ ಟೌನ್ | 2020 | 100 | 1620 ಚ.ಮೀ | |
| 10 | ಮುಧೋಳ | ಸರ್ಕಾರಿ ಮೆಟ್ರಿಕ್ ನಂತರ ಬಾಲಕರ ವಸತಿ ನಿಲಯ, ಮಹಾಲಿಂಗಪೂರ | 2020 | 100 | 9000 ಚ.ಅ | |
| 11 | ಮುಧೋಳ | ಸರ್ಕಾರಿ ಮೆಟ್ರಿಕ್ ನಂತರ ಬಾಲಕರ ವಸತಿ ನಿಲಯ, ಲೋಕಾಪೂರ | 2020 | 100 | 237.69 ಚ.ಮೀ | |
| 12 | ಮುಧೋಳ | ಸರ್ಕಾರಿ ಮೆಟ್ರಿಕ್ ಪೂರ್ವ ಬಾಲಕರ ವಸತಿ ನಿಲಯ, ಯಡಹಳ್ಳಿ | 2020 | 50 | 5445 ಚ.ಅ | |
| 13 | ಮುಧೋಳ | ಸರ್ಕಾರಿ ಮೆಟ್ರಿಕ್ ನಂತರ ಬಾಲಕಿಯರ ವಸತಿ ನಿಲಯ, ಮುಧೋಳ | 2020 | 100 | 6000 ಚ.ಅ | |
| 14 | ಮುಧೋಳ | ಸರ್ಕಾರಿ ಮೆಟ್ರಿಕ್ ಪೂರ್ವ ಬಾಲಕರ ವಸತಿ ನಿಲಯ, ಬೆಳಗಲಿ | 2020 | 50 | 4000 ಚ.ಅ | |
| 15 | ಬೀಳಗಿ | ಸರ್ಕಾರಿ ಮೆಟ್ರಿಕ್ ನಂತರ ಬಾಲಕೀಯರ ವಸತಿ ನಿಲಯ, ಬೀಳಗಿ ಟೌನ | 2014 | 100 | ಬಾಡಿಗೆ ರಹಿತ ಕಟ್ಟಡದಲ್ಲಿ ನಡೆಸಲಾಗುತ್ತಿದೆ. | |
| 16 | ಹುನಗುಂದ | ಸರ್ಕಾರಿ ಮೆಟ್ರಿಕ್ ಪೂರ್ವ ಬಾಲಕರ ವಸತಿ ನಿಲಯ, ಚಿತ್ತರಗಿ | 1999 | 100 | | |

ಮಾನ್ಯ ವಿಧಾನ ಪರಿಷತ್ ಸದಸ್ಯರಾದ ಶ್ರೀ ನಿರಾಣಿ ಹಣಮಂತ್ ರುದ್ರಪ್ಪ ರವರ
ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ:642 ಕ್ಕೆ ಅನುಬಂಧ-3.

---

ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದ ಸಹ ಶಿಕ್ಷಕರಿಗೆ ಸಂಬಂಧಿಸಿದಂತೆ
ಕೆ.ಜಿ.ಐ.ಡಿ, ಡಿ.ಸಿ.ಆರ್.ಜಿ, ಹೆಚ್ಚುವರಿ ವೇತನ ಬಡ್ತಿ ಹಾಗೂ ಇತರೆ ಸೌಲಭ್ಯಗಳ ಕುರಿತ ವಿವರ.

**ಕೆ.ಜಿ.ಐ.ಡಿ**

ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದ ಬೋಧಕ/ಬೋಧಕೇತರ ಸಿಬ್ಬಂದಿಗಳಿಗೆ ಸರ್ಕಾರಿ ನೌಕರರಿಗೆ ನೀಡಲಾಗುವ ಕೆ.ಜಿ.ಐ.ಡಿ. ಸೌಲಭ್ಯವನ್ನು ವಿಸ್ತರಿಸುವ ಪ್ರಸ್ತಾವನೆಯನ್ನು ಆರ್ಥಿಕ ಇಲಾಖೆಯು ಒಪ್ಪಿರುವುದಿಲ್ಲ.

**ಡಿ.ಸಿ.ಆರ್.ಜಿ**

ವಸತಿ ಶಾಲೆಗಳಲ್ಲಿ ಸೇವೆ ಸಲ್ಲಿಸುತ್ತಿರುವ ಖಾಯಂ ನೌಕರರಿಗೆ ಮರಣ ಉಪದಾನ (DCRG) ಸೌಲಭ್ಯ ವಿಸ್ತರಿಸುವ ಬಗ್ಗೆ ಪ್ರಸ್ತುತ ಆರ್ಥಿಕ ಇಲಾಖೆಯ ಪರಿಶೀಲನೆಯಲ್ಲಿರುತ್ತದೆ.

**ಜ್ಯೋತಿ ಸಂಜೀವಿನಿ ಯೋಜನೆ**

ಕಾರ್ಯನಿರ್ವಾಹಕ ನಿರ್ದೇಶಕರು, ಸುವರ್ಣ ಆರೋಗ್ಯ ಸುರಕ್ಷಾ ಟ್ರಸ್ಟ್ ರವರು ಸಂಘದ ನೌಕರರಿಗೆ ಜ್ಯೋತಿ ಸಂಜೀವಿನಿ ಯೋಜನೆಯನ್ನು ವಿಸ್ತರಿಸುವ ಸಂಬಂಧ ಷರತ್ತುಗಳಿಗೆ ಒಳಪಟ್ಟು ತಾತ್ವಿಕ ಒಪ್ಪಿಗೆ ನೀಡಿರುತ್ತಾರೆ. ಈ ಸಂಬಂಧ ಸಿಬ್ಬಂದಿಗಳು ಮತ್ತು ಅವರ ಅವಲಂಬಿತರ ಮಾಹಿತಿಯನ್ನು ಹೆಚ್.ಆರ್.ಎಂ.ಎಸ್ ತಂತ್ರಾಂಶದಲ್ಲಿ ಅಳವಡಿಸಲು ತಂತ್ರಾಂಶವನ್ನು ಉನ್ನತೀಕರಿಸಬೇಕಾಗಿರುತ್ತದೆ. ಈ ಪ್ರಕ್ರಿಯೆಗೆ ಯೋಜನಾ ನಿರ್ದೇಶಕರು, ಹೆಚ್.ಆರ್.ಎಂ.ಎಸ್. ಇವರು ಸಮಯಾವಕಾಶ ಕೋರಿರುತ್ತಾರೆ. ಆದ್ದರಿಂದ, ಈ ಯೋಜನೆಯನ್ನು ಅನುಷ್ಠಾನಗೊಳಿಸಲು ಮುಂದಿನ ಕ್ರಮ ವಹಿಸಲಾಗುವುದು.

**ಹೆಚ್ಚುವರಿ ವೇತನ ಬಡ್ತಿ**

ಶ್ರೀ ಕುಮಾರ್ ನಾಯಕ್ ಸಮಿತಿಯ ಶಿಫಾರಸ್ಸಿನಂತೆ ಶಿಕ್ಷಣ ಇಲಾಖೆಯ ಶಿಕ್ಷಕರುಗಳಿಗೆ ಒಂದು ಹೆಚ್ಚುವರಿ ವೇತನ ಬಡ್ತಿಯನ್ನು ಮಂಜೂರು ಮಾಡಿರುವಂತೆ ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದ ಅಧೀನದ ವಸತಿ ಶಾಲೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಬೋಧಕ ಸಿಬ್ಬಂದಿಗಳಿಗೆ ಒಂದು ಹೆಚ್ಚುವರಿ ವೇತನ ಬಡ್ತಿಯನ್ನು ದಿ:01.06.2016 ರಿಂದ ಅನ್ವಯವಾಗುವಂತೆ ಮಂಜೂರು ಮಾಡುವಂತೆ ಕೋರಲಾಗಿರುತ್ತದೆ. ಈ ಕುರಿತು ನಿಯಮಗಳಲ್ಲಿ ಅವಕಾಶವಿರುವುದಿಲ್ಲ.

ಮುಂದುವರೆದು, ಸಂಘದ ವ್ಯಾಪ್ತಿಯ ಖಾಯಂ ನೌಕರರುಗಳಿಗೆ ಇತರೆ ಸರ್ಕಾರಿ ನೌಕರರುಗಳಿಗೆ ನೀಡುತ್ತಿರುವಂತೆ ವೈದ್ಯಕೀಯ ವೆಚ್ಚ ಮರುಪಾವತಿ, ಮೃತಪಟ್ಟ ಖಾಯಂ ನೌಕರರ ಕುಟುಂಬದ ಸದ್ಯಸ್ಯರಿಗೆ ಅನುಕಂಪ ಆಧಾರದ ಮೇಲೆ ನಿಯಮಾನುಸಾರ ನೌಕರಿ ಹಾಗೂ ದಿ:01.08.2016 ರಿಂದ ಅನ್ವಯವಾಗುವಂತೆ ವಾರ್ಷಿಕ ಗುಂಪು ವಿಮೆ ಸೌಲಭ್ಯವನ್ನು ಕಲ್ಪಿಸಲಾಗಿದ್ದು, ಈವರೆಗೆ ಅರ್ಹರಿರುವ 23 ಮೃತರ ಕುಟುಂಬಕ್ಕೆ ಈ ಸೌಲಭ್ಯ ನೀಡಲಾಗಿರುತ್ತದೆ.